# ಶಾಲಾ ಪುನರಾರಂಭದಲ್ಲಿ ಸಮುದಾಯವನ್ನು ತೊಡಗಿಸಿಕೊಳ್ಳುವುದು

ಮಹಮ್ಮದ್ ಆಲಿ ರಿಜ್ವಿ

## ಹಿನ್ನೆಲೆ

ಕೋವಿಡ್-19 ಕಾಣಿಸಿಕೊಂಡು ಸುಮಾರು ಎರಡು ವರ್ಷಗಳು ಕಳೆದು ಹೋದವು. ರಾಷ್ಟ್ರವ್ಯಾಪಿ ಲಾಕ್‌ಡೌನ್, ಎರಡು ಗಂಭೀರ ಅಲೆಗಳು, ಲಕ್ಷಾಂತರ ಜನರ ಸಾವು, ಶಾಲೆಗಳ ಮುಚ್ಚುಗಡೆ, ಉದ್ಯೋಗ ನಷ್ಟ, ವ್ಯಾಪಾರ ವಹಿವಾಟುಗಳಿಗೆ ಅಡಚಣೆ ಮುಂತಾದವುಗಳನ್ನು ಈ ದೇಶವು ಈಗಾಗಲೇ ಕಂಡಿದ್ದು, ಮಾತ್ರವಲ್ಲದೆ ಭವಿಷ್ಯದಲ್ಲಿ ಏನಾಗಬಹುದು ಎನ್ನುವ ಕುರಿತು ಇನ್ನೂ ಅನಿಶ್ಚಿತತೆ ಇದೆ. ಅಲ್ಲದೆ ಮೂರನೇ ಅಲೆಯನ್ನು ನಾವು ಎದುರು ನೋಡುತ್ತಿದ್ದೇವೆ. ತಜ್ಞರ ಪ್ರಕಾರ ಇದನ್ನು ತಪ್ಪಿಸಲು ಸಾಧ್ಯವಿಲ್ಲ.

ಈಗ, ಎರಡನೇ ಗಂಭೀರ ಅಲೆಯ ವಿರಾಮದ ನಂತರ ಬದುಕು ಪೂರ್ಣ ಮಟ್ಟದಲ್ಲಿ ಸಕ್ರಿಯಗೊಂಡಿದೆ.  ಅಂಗಡಿಗಳು, ಮಾರುಕಟ್ಟೆಗಳು, ಬಜಾರ್‌ಗಳು ತಮ್ಮ ವ್ಯವಹಾರವನ್ನು ಪುನರಾರಂಭಿಸಿವೆ. ಕೆಲಸ ಆರಂಭಗೊಂಡಿದೆ. ಶಾಲೆಗಳನ್ನು ಹೊರತುಪಡಿಸಿ ಬೇರೆಲ್ಲ ರೀತಿಯಲ್ಲಿ ಬದುಕು ಸಹಜತೆಗೆ ಮರಳಿದೆ. ಮಕ್ಕಳು ಇಲ್ಲದ ಕಾರಣ, ಶಿಕ್ಷಕರು ಮಾತ್ರವೇ ಭೇಟಿ ನೀಡುತ್ತಿರುವುದರಿಂದ ಪ್ರಾಥಮಿಕ ಶಾಲೆಗಳು ಇನ್ನೂ ನಿರ್ಜನ ಪ್ರದೇಶಗಳಂತೆ ಕಾಣುತ್ತಿವೆ. ಕೆಲವು ಶಾಲೆಗಳಲ್ಲಿ ಒಂದಷ್ಟು ಮಕ್ಕಳು ಕಾಣಿಸಿಕೊಳ್ಳುತ್ತಾರೆ. ಶಿಕ್ಷಕರು ಸೋಶಿಯಲ್ ಮೀಡಿಯಾ ಫಾರ್ ಇಂಟರ್‌ಫೇಸ್ ಫಾರ್ ಲರ್ನಿಂಗ್ ಎಂಗೇಜ್‌ಮೆಂಟ್ (ಸ್ಮೈಲ್) ಕಾರ್ಯಕ್ರಮದ ಮೂಲಕ ಆನ್‌ಲೈನ್ ಕಲಿಕೆಯನ್ನು ಮುಂದುವರಿಸಬೇಕಾದ ಒತ್ತಡವನ್ನು ಎದುರಿಸುತ್ತಿದ್ದಾರೆ. ಸ್ವೀಕರಿಸಲಾದ ಹೊಸ ಕಾರ್ಯಹಾಳೆಗಳ ತಪಾಸಣೆ ಮಾಡುವುದಕ್ಕಾಗಿ ಅವರು ನೆಟ್‌ವರ್ಕ್ ಹುಡುಕಿಕೊಂಡು ಹೋಗುವುದನ್ನು ನಾವು ಆಗಾಗ್ಗೆ ನೋಡಬಹುದು. ಅವರು ಈ ಕಾರ್ಯಹಾಳೆಗಳಿಗೆ ಸಂಬಂಧಿಸಿದ ವೀಡಿಯೋಗಳನ್ನು ಪಡೆಯುತ್ತಾರೆ. ಆದರೆ ಹೆಚ್ಚಿನ ಸಂದರ್ಭದಲ್ಲಿ, ಈ ವೀಡಿಯೋಗಳನ್ನು ನೋಡದೆಯೇ ಕಾರ್ಯಹಾಳೆಗಳನ್ನು ಭರ್ತಿ ಮಾಡಬೇಕಾದ ಅನಿವಾರ್ಯತೆ ವಿದ್ಯಾರ್ಥಿಗಳ ಪಾಲಿಗೆ ಒದಗಿ ಬರುತ್ತದೆ. ಪಾಠವನ್ನು ಕಲಿಸುವುದು ಅಥವಾ ವೀಡಿಯೋವನ್ನು ತೋರಿಸುವುದು ಶಿಕ್ಷಕರ ಪಾಲಿಗೆ ಸವಾಲಿನ ಕೆಲಸ. ಏಕೆಂದರೆ ವಿದ್ಯಾರ್ಥಿಗಳನ್ನು ಅಧಿಕೃತವಾಗಿ ಶಾಲೆಗೆ ಕರೆಯುವಂತಿಲ್ಲ. ಅಲ್ಲದೆ ಕಾರ್ಯಹಾಳೆಯನ್ನು ನೀಡಲು ಪ್ರತಿ ವಿದ್ಯಾರ್ಥಿಯನ್ನು ಭೇಟಿಯಾಗುವುದು ಕಾರ್ಯಸಾಧುವಲ್ಲ. ಶಿಕ್ಷಕರು ವೀಡಿಯೋ ಲಿಂಕ್‌ಗಳು ಮತ್ತು ಕಾರ್ಯಹಾಳೆಗಳನ್ನು ಪೋಷಕರಿಗೆ ಕಳುಹಿಸಿದರೂ, ಹೆಚ್ಚಿನ ಮಕ್ಕಳ ಬಳಿ ಸ್ಮಾರ್ಟ್‌ಫೋನ್‌ಗಳಿಲ್ಲ. ಇಡೀ ಕುಟುಂಬದಲ್ಲಿ ತಂದೆಯ ಬಳಿ ಮಾತ್ರವೇ ಫೋನ್ ಇರುತ್ತದೆ. ಅವರು ಅದನ್ನು ಕೆಲಸಕ್ಕೆ ತೆಗೆದುಕೊಂಡು ಹೋಗುತ್ತಾರೆ. ಸ್ಮಾರ್ಟ್‌ಫೋನ್ ಇರುವ ವಿದ್ಯಾರ್ಥಿಗಳು ಡೇಟಾ ಪ್ಯಾಕ್ ಮತ್ತು ನೆಟ್‌ವರ್ಕ್ ಸಂಪರ್ಕದ ಅಲಭ್ಯತೆಯ ಸಮಸ್ಯೆಯನ್ನು ಎದುರಿಸುತ್ತಾರೆ. ಮೊಬೈಲ್ ಗೇಮ್‌ಗಳನ್ನು ಆಡದೆ ಅಥವಾ ತಮ್ಮ ಆಯ್ಕೆಯ ವೀಡಿಯೋಗಳನ್ನು ವೀಕ್ಷಿಸದೆ ತಮ್ಮ ಶಿಕ್ಷಕರು ಕಳುಹಿಸಿದ ವೀಡಿಯೋಗಳನ್ನು ವೀಕ್ಷಿಸಿ ಕಾರ್ಯಹಾಳೆಗಳನ್ನು ಪೂರ್ಣಗೊಳಿಸಲು ಮಕ್ಕಳಿಗೆ ಸಾಕಷ್ಟು ಉತ್ತೇಜನ ನೀಡಬೇಕಾಗುತ್ತದೆ. ಒಟ್ಟಾರೆ ಹೇಳುವುದಾದರೆ, ಬಾರ್ಮರ್‌ನಂತರ ಗ್ರಾಮೀಣ ಪ್ರದೇಶಗಳಲ್ಲಿ, ಶಿಕ್ಷಕರು ಕಲಿಸುತ್ತಿದ್ದಾರೆ ಎಂದು ಭಾವಿಸುವುದು ಮತ್ತು ತಮ್ಮ ಮಕ್ಕಳು ಕಲಿಯುತ್ತಿದ್ದಾರೆ ಎಂದು ಪೋಷಕರು ಭಾವಿಸುವುದು ಅವರ ಪಾಲಿನ ಭ್ರಮೆ ಅಷ್ಟೇ. ಅಜೀಂ ಪ್ರೇಮ್‌ಜಿ ಫೌಂಡೇಶನ್‌ನ ಸಮೀಕ್ಷೆಗಳು ಸೇರಿದಂತೆ ಆನ್‌ಲೈನ್ ಕಲಿಕೆಯ ಕುರಿತು ಅನೇಕ ಸಮೀಕ್ಷೆಗಳು ಮತ್ತು ಅಧ್ಯಯನಗಳನ್ನು ಮಾಡಲಾಗಿದ್ದು, ಇವುಗಳ ಫಲಿತಾಂಶಗಳು ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಈ ಕಲಿಕೆಯ ನಿಷ್ಫಲ ಮತ್ತು ಮಿತಿಗಳನ್ನು ಎತ್ತಿ ತೋರಿಸಿವೆ.ನಾವು ಸರಿಸುಮಾರು ಎರಡು ವರ್ಷಗಳ ಕಲಿಕಾ ನಷ್ಟವನ್ನು ಅನುಭವಿಸಿರುವ ಇಂತಹ ಸಂದರ್ಭದಲ್ಲಿ, ಆನ್‌ಲೈನ್ ಕಲಿಕೆಯ ಮೂಲಕ ಕಲಿಕೆಯು ಸರಾಗವಾಗಿ ಮುಂದುವರಿಯುತ್ತಿದೆ ಎಂದು ನಂಬುವ ಬದಲಿಗೆ ಸಮಗ್ರ, ಕಾರ್ಯಸಾಧುವಾದ ಮತ್ತು ಸುರಕ್ಷಿತ ಶಾಲಾ ಪುನರಾರಂಭ ಯೋಜನೆಗಳ ಕುರಿತು ಯೋಚಿಸಬೇಕು. ಶಾಲೆಗಳ ಪುನರಾರಂಭ ಮತ್ತು ಅವುಗಳ

ಕಾರ್ಯನಿರ್ವಹಣೆಯು ಕೋವಿಡ್-19 ಹರಡುವ ಭೀತಿಯನ್ನು ಒಡ್ಡಿದರೂ ಅನೇಕ ದೇಶಗಳು ಮತ್ತು ಭಾರತದಲ್ಲೂ ಕಲವುರಾಜ್ಯಗಳು ಈಗಾಗಲೇ ಶಾಲೆಗಳನ್ನು ತೆರೆದಿವೆ. ಈ ಕಾರಣಕ್ಕಾಗಿಯೇ ಹೆಚ್ಚಿನ ರಾಜ್ಯಗಳು ಪ್ರಾಥಮಿಕ ಶಾಲೆಗಳನ್ನು ತೆರೆಯುವ ನಿರ್ಧಾರವನ್ನು ಇನ್ನೂ ಮಾಡಿಲ್ಲ. ನಮ್ಮ ವಿದ್ಯಾರ್ಥಿಗಳಿಗೆ ಲಸಿಕೆಯನ್ನು ಪಡೆಯುವ ತನಕ ಹಾಗು ಅವರೆಲ್ಲರೂ ಲಸಿಕೆ ಹಾಕಿಸಿಕೊಳ್ಳುವ ತನಕ ಈ ಭೀತಿ ಅಳಿದು ಹೋಗದು. ಆದರೆ ಲಸಿಕೆಯ ಪ್ರಕ್ರಿಯು ದೀರ್ಘ ಹಾಗೂ ದಣಿವಿನ ಕೆಲಸವಾಗಿದೆ. ಹಾಗಾದರೆ ಪ್ರಾಥಮಿಕ ಶಾಲೆಗಳ ಕುರಿತು ನಾವೇನು ಮಾಡಬೇಕು? ನಾವು ಆನ್‌ಲೈನ್ ತರಗತಿಗಳನ್ನು ಮುಂದುವರಿಸಬೇಕೇ ಅಥವಾ ವಿದ್ಯಾಥಿಗಳ ಜೊತೆಗೆ ಮುಖಾಮುಖಿ ಸಂವಾದಗಳನ್ನು ನಡೆಸುವ ವಿಧಾನಗಳ ಕುರಿತು ಯೋಚಿಸಬೇಕೆ? ಈ ಉದ್ದೇಶಕ್ಕಾಗಿ ಸಣ್ಣ ಪಂಗಡಗಳಲ್ಲಿ ಕಲಿಕೆಯನ್ನು ಪ್ರಾರಂಭಿಸುವುದಕ್ಕಾಗಿ ಕೆಲವು ಶಾಲೆಗಳ ಶಿಕ್ಷಕರು ಈಗಾಗಲೇ ಕೆಲವೊಂದು ವಿಧಾನಗಳನ್ನು ವಿನ್ಯಾಸಗೊಳಿಸಿದ್ದಾರೆ. ಬಾರ್ಮರ್‌ನ ಪಂಚಾಯತ್ ಒಂದರ ಪಂಚಾಯತ್ ಪ್ರಾಥಮಿಕ ಶಿಕ್ಷಣ ಅಧಿಕಾರಿ (ಪಿಇಇಒ), ಸುರಕ್ಷಿತ ಮತ್ತು ಸುಭದ್ರ ಪರಿಸರದಲ್ಲಿ ನಿರಂತರ ತರಗತಿಗಳನ್ನು ಪ್ರಾರಂಭಿಸಲು ವಿಧಾನಗಳನ್ನು ಕಂಡುಹಿಡಿಯಲು ನಿರ್ಧರಿಸಿದರು. ಏಕೆಂದರೆ ಶಾಲೆಗಳನ್ನು ತೆರೆಯುವುದಕ್ಕಾಗಿ ನಾವು ಸರ್ಕಾರವನ್ನು ನೆಚ್ಚಿ ನಿಲ್ಲಲು ಆಗುವುದಿಲ್ಲ. ಮಕ್ಕಳಿಗಾಗಿ ವೈಯಕ್ತಿಕ ತರಗತಿಗಳನ್ನು ನಡೆಸಲು ನಾವು ದಾರಿ ಕಂಡುಕೊಳ್ಳಬೇಕಿತ್ತು. ನಾವು ಇದನ್ನು ಸ್ಥಳೀಯ ಸಮುದಾಯದ ಸಹಾಯದಿಂದ ಸಾಧಿಸಿದೆವು.

ಸಮುದಾಯದ ಪಾಲ್ಗೊಳ್ಳುವಿಕೆ

ಅಕ್ಕಪಕ್ಕದಲ್ಲಿ ವಾಸಿಸುವ, ಒಟ್ಟಿಗೆ ಸಮಯ ಕಳೆಯುವ ಮತ್ತು ಒಟ್ಟಿಗೆ ಆಟವಾಡುವ ಮಕ್ಕಳ ಪಂಗಡವನ್ನು ಶಿಕ್ಷಕರು ಗುರುತಿಸಿದರು. ವಿದ್ಯಾರ್ಥಿಗಳಿಗೆ ನಿರಂತರ ತರಗತಿಗಳನ್ನು ನಡೆಸುವ ವಿಚಾರವನ್ನು ಸಮುದಾಯದೊಂದಿಗೆ ಹಂಚಿಕೊಳ್ಳಲಾಯಿತು ಹಾಗು ತರಗತಿಗಳನ್ನು ಯೋಜಿಸುವಾಗ ಅವರನ್ನು ಒಳಗೊಳ್ಳಲಾಯಿತು. ಪ್ರತಿ ಪ್ರಾಥಮಿಕ ಶಾಲೆಯು, ಮಕ್ಕಳು ಒತ್ತೊತ್ತಾಗಿ ಇರುವ ಎರಡು ಅಥವಾ ಮೂರು ಸ್ಥಳಗಳನ್ನು ಗುರುತಿಸಬೇಕಿತ್ತು. ತರಗತಿಗಳನ್ನು ನಡೆಸುವುದಕ್ಕಾಗಿ ಒಂದು ಸ್ಥಳವನ್ನು ಗುರುತಿಸಲಾಯಿತು. ಮುಖ್ಯವಾಗಿ ಕೋವಿಡ್-19 ನಿಯಮಾವಳಿಗಳನ್ನು ಪಾಲಿಸಿ ಮಕ್ಕಳು ಕುಳಿತುಕೊಳ್ಳಬಹುದಾಗಿದ್ದ ಮುಕ್ತ ಸ್ಥಳ ಅಥವಾ ಸಭಾಂಗಣ ಇದಾಗಿತ್ತು. ಅಲ್ಲದೆ ಸಣ್ಣ ಗುಂಪುಗಳಲ್ಲಿ ಕೋವಿಡ್-19 ನಿಯಮಾವಳಿಗಳನ್ನು ಪಾಲಿಸುವುದು ಸುಲಭವಾಗಿತ್ತು. ಸಮುದಾಯವು ಆತಂಕಕ್ಕೊಳಗಾಗಲಿಲ್ಲ. ಏಕೆಂದರೆ ಎಲ್ಲಾ ವಿದ್ಯಾರ್ಥಿಗಳು ಸಂಬಂಧಿಗಳ ಅಥವಾ ಪರಸ್ಪರ ಪರಿಚಿತ ಕುಟುಂಬದಿಂದ ಬಂದವರಾಗಿದ್ದರು.

ಗ್ರಾಮೀಣ ಬಾರ್ಮರ್ ಸಾಮಾನ್ಯವಾಗಿ 'ಢಾಣಿ'ಗಳಿಂದ ತುಂಬಿ ಹೋಗಿದೆ. ಅಂದರೆ ಇವು ಒಂದೇ ವಂಶ ಅಥವಾ ಕುಟುಂಬ ಅಥವಾ ಜನರಿಗೆ ಸೇರಿದ ಮನೆಗಳ ಸಮುಚ್ಛಯವಾಗಿದ್ದು ತಮ್ಮ ಜಾತಿ ಅಥವಾ ಜೀವನ ವಿಧಾನದ ಕಾರಣ ಪರಸ್ಪರ ತುಂಬಾ ಅನ್ಯೋನ್ಯತೆಯನ್ನು ಹೊಂದಿರುತ್ತಾರೆ. ಪಂಚಾಯತುಗಳಲ್ಲಿ ಅಭ್ಯಾಸ ಬೋಧನೆಯಲ್ಲಿ ತೊಡಗಿದ್ದ ಹಾಗು ಶಿಕ್ಷಕರಿಗೆ ನೆರವು ಒದಗಿಸುತ್ತಿದ್ದ ನಮ್ಮ ಸಂಗಾತಿಗಳು ಈ ತರಗತಿಗಳನ್ನು ಢಾಣಿ ತರಗತಿಗಳು ಎಂದು ಕರೆದರು. ಬಾರ್ಮರ್‌ನ ತಾಪಮಾನವನ್ನು ಪರಿಗಣಿಸಿ ಈ ತರಗತಿಗಳ ಸಮಯವನ್ನು ಬೆಳಗ್ಗೆ 7.30ರಿಂದ 11.00ರ ತನಕ ನಿಗದಿಪಡಿಸಲಾಯಿತು. ಮಕ್ಕಳು ತರಗತಿಗಳಲ್ಲಿ ಸಕಾಲದಲ್ಲಿ ಹಾಜರಾಗುತ್ತಿದ್ದರು. ಅಸಾಮಾನ್ಯ ವ್ಯವಸ್ಥೆಯಲ್ಲಿ ಹಾಗು ದೀರ್ಘ ಕಾಲದ ನಂತರ ತರಗತಿಗಳಲ್ಲಿ ಭಾಗವಹಿಸುವುದಕ್ಕಾಗಿ ಅವರಲ್ಲಿದ್ದ ಉತ್ಸುಕತೆ ಮುಗಿಲು ಮುಟ್ಟಿತ್ತು. ಕಳೆದ 18 ತಿಂಗಳುಗಳಿಂದ ಮನೆಯಲ್ಲಿ ಬೋರು ಹೊಡೆಯುವ ವಾತಾವರಣದಲ್ಲಿ ಸಿಲುಕಿಕೊಂಡಿದ್ದ ಮಕ್ಕಳಿಗೆ ಈ ತರಗತಿಗಳು ಆಶ್ರಯ ತಾಣ ಎನಿಸಿದವು. ಮೊದಲ ತಲೆಮಾರಿನ ವಿದ್ಯಾರ್ಥಿ ಎನಿಸಿದ ಖೇತಾ ರಾಮ್, ಎರಡು ವರ್ಷಗಳ ಕಾಲ ತನ್ನ ಶಾಲಾ ಅವಧಿಯನ್ನು ಕಳೆದುಕೊಂಡ ಕಾರಣ ಬೇಸರಗೊಂಡಿದ್ದ. ಆದರೆ ಈಗ ತನ್ನ ಶಿಕ್ಷಕರಿಂದ ಅಚ್ಚುಮೆಚ್ಚಿನ ವಿಷಯಗಳನ್ನು ಕಲಿಯಲು ಅವಕಾಶ ಸಿಕ್ಕ ಕಾರಣ ಪುಳಕಿತಗೊಂಡಿದ್ದ.

ತರಗತಿಗಳಿಗೆ ಮರಳುವುದು

ಈ ತರಗತಿಗಳು ಶಿಕ್ಷಕರಿಗೆ ವಿವಿಧ ಸವಾಲುಗಳನ್ನು ಒಡ್ಡಿದವು. ಅವರು ವಿವಿಧ ವರ್ಗಗಳ ಮತ್ತು ವಿವಿಧ ಮಟ್ಟದ (ಎಂಜಿಎಂಎಲ್) ತರಗತಿಗಳನ್ನು ನಡೆಸಬೇಕಿದ್ದುದು ಅವರ ಮೊದಲ ದೊಡ್ಡ ಸವಾಲಾಗಿತ್ತು. ಈ ಸವಾಲು ಬೃಹತ್ ಆಗಿ ಕಂಡರೂ, ಪೂರ್ವಸಿದ್ಧತೆಯನ್ನು ತಗ್ಗಿಸುವಲ್ಲಿ ಇದು ಸಹಾಯ ಮಾಡುತ್ತದೆ. ಏಕೆಂದರೆ ಒಂದು ಎಂಜಿಎಂಎಲ್ ಪಾಠದ ಯೋಜನೆಯನ್ನು (ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ) ಬಹುಪಾಲು ಎಲ್ಲಾ ಢಾಣಿ ತರಗತಿಗಳಲ್ಲಿ ಬಳಸಬಹುದು. ಸಮಯದ ನಿರ್ವಹಣೆಯು ಇನ್ನೊಂದು ಸವಾಲೆನಿಸಿತ್ತು. ತರಗತಿಗಳ ಸ್ಥಳವು 2ರಿಂದ 5 ಕಿ.ಮೀ.ನಷ್ಟು ದೂರದಲ್ಲಿತ್ತು. ಕೆಲವೊಂದು ಸ್ಥಳಗಳನ್ನು ಮರಳಿನ ದಾರಿಯ ಮೂಲಕ ಅಥವಾ ಮರಳಿನ ದಿಣ್ಣೆಯನ್ನು ದಾಟಿ ತಲುಪಬೇಕಿತ್ತು. ಈ ಪರಿಸ್ಥಿತಿಯನ್ನು ನಿಭಾಯಿಸುವುದಕ್ಕಾಗಿ, ತಮ್ಮ ಶಾಲೆಗಳ ಸಿಬ್ಬಂದಿಗಳ ಸಂಖ್ಯಾಬಲವನ್ನು ಆಧರಿಸಿ ಶಿಕ್ಷಕರು ವೇಳಾಪಟ್ಟಿಯನ್ನು ರೂಪಿಸಿದರು. ಉದಾಹರಣೆಗೆ, ಒಂದು ಶಾಲೆಯಲ್ಲಿ ಇಬ್ಬರು ಶಿಕ್ಷಕರು ಇದ್ದು ಅವರು ನಮ್ಮ ಢಾಣಿಗಳನ್ನು ಭೇಟಿ ನೀಡಿ ವಾರಕ್ಕೆ ಎರಡರಿಂದ ಮೂರು ತರಗತಿಗಳನ್ನು ತೆಗೆದುಕೊಳ್ಳಬೇಕಿತ್ತು. ಇದು ಅಸಮರ್ಪಕ ಎಂಬುದಾಗಿ ಭಾಸವಾಗಬಹುದು. ಆದರೆ ಔಪಚಾರಿಕ ಶಿಕ್ಷಣದಿಂದ ದೀರ್ಘ ಕಾಲ ದೂರ ಉಳಿದಿದ್ದ ಮಕ್ಕಳ ಕಲಿಕೆಯ ನಷ್ಟವನ್ನು ಸರಿದೂಗಿಸಲು ಮತ್ತು ಶಾಲೆಗಳ ನಿಯಮಿತ ಪುನರಾರಂಭಕ್ಕೆ ಸಿದ್ಧಗೊಳ್ಳಲು ಇದೊಂದು ಅದ್ಭುತ ಅವಕಾಶವಾಗಿದೆ.ವಿದ್ಯಾರ್ಥಿಗಳು ಯಾವಾಗಲೂ ಅಂತರವನ್ನು ಕಾಪಾಡಲು ಮತ್ತು ಮಾಸ್ಕ್ ಧರಿಸಲು ಉತ್ತೇಜಿಸುವುದು ಮುಂತಾದ ಕೋವಿಡ್-19 ನಿಯಮಾವಳಿಗಳನ್ನು ಪಾಲಿಸುವುದು ಸಹ ಕಷ್ಟದ ಕೆಲಸವೇ. ಆದರೆ ಪೋಷಕರು ಮತ್ತು ಸಮುದಾಯದ ಪಾಲ್ಗೊಳ್ಳುವಿಕೆಯಿಂದ ಈ ಚಿಂತೆಯನ್ನು ನಿವಾರಿಸಲಾಯಿತು. ನೀರು, ಶೌಚಾಲಯದ ಕೊರತೆ ಹಾಗು ಇಲ್ಲಿಯತನಕ ಔಪಚಾರಿಕ ತರಗತಿಗಳಲ್ಲಿ ಪಾಲ್ಗೊಳ್ಳದ ತರಗತಿ I ಮತ್ತು ತರಗತಿ IIರ ಮಕ್ಕಳನ್ನು ಸಂಭಾಳಿಸುವುದು ಮುಂತಾದ ಕೆಲವು ಸವಾಲುಗಳು ಎದುರಾದವು. ಆದರೆ ಈ ಎಲ್ಲಾ ಸವಾಲುಗಳನ್ನು ಸ್ವೀಕರಿಸಿ ಕೆಲಸ ಮಾಡುವುದು ಯುಕ್ತವಾಗಿತ್ತು. ಏಕೆಂದರೆ ಈ ಪ್ರಯತ್ನಗಳ ಕಾರಣ ಮಕ್ಕಳು ಕಲಿಯುವುದನ್ನು ನೋಡಿ ಸಾಕಷ್ಟು ನಿರಾಳತೆ ಮತ್ತು ಆತ್ಮತೃಪ್ತಿ ದೊರೆಯಿತು.  ಆನ್‌ಲೈನ್ ತರಗತಿಗಳನ್ನು ನಡೆಸುವುದಕ್ಕಾಗಿ ಶಿಕ್ಷಕರು ಸಾಕಷ್ಟು ಪ್ರಯತ್ನ ಪಟ್ಟಿದ್ದರೂ, ಈ ಮಧ್ಯಸ್ಥಿಕೆಯು ಮಕ್ಕಳ ಪಾಲಿಗೆ ಸಾಕಷ್ಟು ಪ್ರಯೋಜನಕಾರಿ ಎನಿಸಿರಲಿಲ್ಲ.

ನಮ್ಮ ಕಲಿಕೆ

ಈ ವಿಚಾರವು ಯಶಸ್ವಿಯಾಗಬೇಕಾದರೆ ಶಾಲೆಗಳ ಪುನರಾರಂಭದ ಯೋಜನೆ ಮತ್ತು ಕಾರ್ಯಗತಗೊಳಿಸುವುದು ಮತ್ತು ಭೌತಿಕ ತರಗತಿಗಳಿಗೆ ಮರಳುವುದಕ್ಕಾಗಿ ಸಮುದಾಯವನ್ನು ಒಳಗೊಳ್ಳುವುದು ಅತ್ಯಗತ್ಯ. ಶಿಕ್ಷಕರು ತೋರಿದ ಒಂದಷ್ಟು ಧೈರ್ಯ ಮತ್ತು ಸಮುದಾಯದ ಸದಸ್ಯರ ಸಹಕಾರವು, ಶಾಲೆಯು ಅಧಿಕೃತವಾಗಿ ಪುನರಾರಂಭಗೊಳ್ಳುವ ತನಕ ತಾತ್ಕಾಲಿಕ ತರಗತಿ ಕೊಠಡಿಗಳ ಶೀಘ್ರ ಬದಲಾವಣೆಗೆ ಅನುವು ಮಾಡಿಕೊಟ್ಟಿತು. ಅದು ಸಾಧ್ಯಗೊಳ್ಳುವಾಗ ಕಲಿಯುವ ಪಾಠಕ್ಕೆ ಬೆಲೆ ಕಟ್ಟಲಾಗದು.

*ಮಕ್ಕಳ ಗುರುತನ್ನು ಮರೆಮಾಚುವ ಉದ್ದೇಶದಿಂದ ಹೆಸರುಗಳನ್ನು ಬದಲಾಯಿಸಲಾಗಿದೆ

ಮಹಮ್ಮದ್ ಆಲಿ ರಿಜ್ವಿ ಅವರು ಕಳೆದ ಐದು ವರ್ಷಗಳಿಂದ ರಾಜಸ್ಥಾನದ ಬಾರ್ಮರ್‌ನಲ್ಲಿರುವ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಶಿಕ್ಷಕ-ಬೋಧಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಮಕ್ಕಳ ಭಾಷಾ ಕಲಿಕೆಯಲ್ಲಿ ಆಸಕ್ತಿ ಹೊಂದಿದ್ದಾರೆ. ಅವರು ಅಲಿಘಡ ಮುಸ್ಲಿಂ ವಿಶ್ವವಿದ್ಯಾಲಯದಿಂದ ಇಂಗ್ಲಿಷ್ ಭಾಷಾ ಕಲಿಕೆಯಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಕುದುರೆ ಸವಾರಿ, ಛಾಯಾಗ್ರಹಣ, ಮತ್ತು ಗ್ರಾಮೀಣ ಭಾರತದ ಪರಿಶೋಧನೆ ಅವರ ಆಸಕ್ತಿಯ ವಿಷಯಗಳಾಗಿವೆ. ಆಲಿ ಅವರನ್ನು ali.rizvi@azimpremjifoundation.org ಮೂಲಕ ಸಂಪರ್ಕಿಸಬಹುದು.